# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 535

ಮಾನ್ಯ ಸದಸ್ಯರ ಹೆಸರು : ಶ್ರೀ ಅ.ದೇವೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸುವ ದಿನಾಂಕ : 21/02/2022

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ, ಸಚಿವರು

*****

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಮನಗರ ಜಿಲ್ಲೆಯ ವ್ಯಾಪ್ತಿಯಲ್ಲಿ ಸರ್ಕಾರ ಗುರುತಿಸಿರುವ ಪ್ರವಾಸೋದ್ಯಮ ತಾಣಗಳು ಯಾವವು:</td><td>ಕರ್ನಾಟಕ ಪ್ರವಾಸೋದ್ಯಮ ನೀತಿ 2020-25ರಡಿಯಲ್ಲಿ ರಾಮನಗರ ಜಿಲ್ಲೆಯಲ್ಲಿ ಈ ಕೆಳಕಂಡ ಪ್ರವಾಸಿತಾಣಗಳನ್ನು ಇಲಾಖೆಯಿಂದ ಗುರುತಿಸಲಾಗಿದೆ.
<table>
<tr><th>ತಾಲ್ಲೂಕು</th><th>ಗುರುತಿಸಿರುವ ಪ್ರವಾಸಿ ತಾಣಗಳು</th></tr>
<tr><td>ರಾಮನಗರ</td><td>ರಾಮನಗರ, ಕಣ್ವ, ರೇವಣಸಿದ್ದೇಶ್ವರ ಬೆಟ್ಟ, ಹಂದಿಗುಂದಿ ಬೆಟ್ಟ, ಕುಟಗಲ್ಲು ತಿಮ್ಮಪ್ಪನ ಬೆಟ್ಟ, ಜಲ ಸಿದ್ದೇಶ್ವರ ಬೆಟ್ಟ, ಬಾನಂದೂರು.</td></tr>
<tr><td>ಮಾಗಡಿ</td><td>ಸಾವನದುರ್ಗ, ತಿಪ್ಪಗೊಂಡನಹಳ್ಳಿ, ಕೊಟಗಲ್ಲು, ಮಾಗಡಿ, ಬಿಲಿನಕಟ್ಟೆ ವನದೇವತೆ, ಯತಿರಾಜಸ್ವಾಮಿ ಬೆಟ್ಟ, ಶ್ರೀ ಲಕ್ಷ್ಮೀನಾರಾಯಣಸ್ವಾಮಿ ಬೆಟ್ಟ, ಕಲ್ಯಾ ಬೆಟ್ಟ, ಮಾಗಡಿ ಕೋಟೆ, ಎತ್ತಿನಗುಲಗಂಜಿಗುಡ್ಡ (ವೈ.ಜಿ.ಗುಡ್ಡ) ಜಲಾಶಯ.</td></tr>
<tr><td>ಕನಕಪುರ</td><td>ಮೇಕೆದಾಟು(ಸಂಗಮ) ರಾಮನಗರ ಅಚಲುಬೆಟ್ಟ, ಮೈತ್ರೇಯ ಪಿರಮಿಡ್ ಕಣಿವೆ, ಚತುರ್ಭುಜ-ರಾಮದೇವರ ಬೆಟ್ಟ.</td></tr>
<tr><td>ಚನ್ನಪಟ್ಟಣ</td><td>ಚೆನ್ನಪಟ್ಟಣ, ದೊಡ್ಡಮಳ್ಳೂರು.</td></tr>
</table></td></tr>
<tr><td>ಆ)</td><td>ನಾಡಪ್ರಭು ಕೆಂಪೇಗೌಡರು ನಿರ್ಮಿಸಿರುವ ಮಾಗಡಿ ಕೋಟೆ ಪಂಚಲಿಂಗ ದೇವಸ್ಥಾನಗಳು ಹಾಗೂ ಭೈರವದುರ್ಗ, ಸಾವನದುರ್ಗ, ಹುತ್ರಿದುರ್ಗ, ಹುಲಿಯೂರುದುರ್ಗ , ರಾಮದುರ್ಗ, ಶ್ರೀ ರೇವಣಸಿದ್ದೇಶ್ವರ ಬೆಟ್ಟ ಇವುಗಳನ್ನು ಸರ್ಕಾರ ಪ್ರವಾಸೋದ್ಯಮ ತಾಣಗಳಾಗಿ ಗುರುತಿಸಿ ಅಭಿವೃದ್ಧಿ ಪಡಿಸಲು ಕ್ರಮ ಕೈಗೊಳ್ಳಲಾಗಿದೆಯೇ:</td><td rowspan="2">ನಾಡಪ್ರಭು ಕೆಂಪೇಗೌಡರು ನಿರ್ಮಿಸಿರುವ ಮಾಗಡಿ ಕೋಟೆ ಪಂಚಲಿಂಗ ದೇವಸ್ಥಾನಗಳು ಹಾಗೂ ಭೈರವದುರ್ಗ, ಸಾವನದುರ್ಗ, ಹುತ್ರಿದುರ್ಗ, ಹುಲಿಯೂರುದುರ್ಗ, ರಾಮದುರ್ಗ, ಶ್ರೀ ರೇವಣಸಿದ್ದೇಶ್ವರ ಬೆಟ್ಟ ಇವುಗಳನ್ನು ಸರ್ಕಾರ ಪ್ರವಾಸೋದ್ಯಮ ತಾಣಗಳಾಗಿ ಗುರುತಿಸಿ ಅಭಿವೃದ್ಧಿ ಪಡಿಸಲು ಪ್ರವಾಸೋದ್ಯಮ ಇಲಾಖೆಯಿಂದ ಕೈಗೊಂಡಿರುವ ಕಾಮಗಾರಿಗಳ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ.</td></tr>
<tr><td>ಇ)</td><td>ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡಿದ್ದಲ್ಲಿ ಇಲ್ಲಿಯವರೆಗೂ ಜೀರ್ಣೋದ್ಧಾರವಾಗದಿರಲು ಕಾರಣವೇನು: ಜೀರ್ಣೋದ್ಧಾರ ಕಾರ್ಯವನ್ನು ಮುಗಿಸಲು ಇನ್ನು ಎಷ್ಟು ಸಮಯಾವಕಾಶ ಬೇಕಾಗುತ್ತದೆ: ನಿಗಧಿತ ಕಾಲಾವಧಿಯಲ್ಲಿ ಪೂರ್ಣಗೊಳಿಸದೇ ಇರುವುದಕ್ಕೆ ಕಾರಣಗಳೇನು: ಈ ಬಗ್ಗೆ ಕೈಗೊಂಡ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು)</td></tr>
</table>

ಸಂಖ್ಯೆ: ಟಿಓಆರ್ 38 ಟಿಡಿವಿ 2022

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು
ಜೀವಿಶಾಸ್ತ್ರ, ಸಚಿವರು

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 535ಕ್ಕೆ ಅನುಬಂಧ

| ಕ್ರ. ಸಂ | ಪ್ರವಾಸಿ ತಾಣದ ಹೆಸರು | ಕಾಮಗಾರಿಯ ವಿವರ |
|---|---|---|
| 1 | ಮಾಗಡಿಕೋಟೆ | ಕೇಂದ್ರ ಪ್ರವಾಸೋದ್ಯಮ ಮಂತ್ರಾಲಯವು ಅನುಮೋದನೆ ನೀಡಿರುವ ರೂ.486.79 ಲಕ್ಷಗಳ ಕಾಮಗಾರಿಗಳಲ್ಲಿ Site Development Works ನಡಿ ಮಾಗಡಿ ಕೋಟೆಯ ಸಂರಕ್ಷಣಾ ಕಾಮಗಾರಿಯನ್ನು ರೂ.291.17 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳಲಾಗಿದೆ. |
| 2 | ಸಾವನದುರ್ಗ, | ಸಾವನದುರ್ಗದಲ್ಲಿ ಪ್ರವಾಸಿ ಶೌಚಾಲಯ ನಿರ್ಮಾಣ ಕಾಮಗಾರಿಯನ್ನು ರೂ.15.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ. |
| 3 | ಶ್ರೀ ರೇವಣ ಸಿದ್ದೇಶ್ವರ ಬೆಟ್ಟ | 2009-10ನೇ ಸಾಲಿನಲ್ಲಿ ರೂ.97.75 ಲಕ್ಷಗಳಲ್ಲಿ ಅಥಿತಿ ಗೃಹ ನಿರ್ಮಾಣ ಮಾಡಲಾಗಿದೆ. |
| 4 | ಹುತ್ರೀದುರ್ಗ | ಕುಣಿಗಲ್ ತಾಲ್ಲೂಕಿನಲ್ಲಿರುವ ಹುತ್ರಿದುರ್ಗ ಬೆಟ್ಟದಲ್ಲಿ ರೂ.50.00 ಲಕ್ಷಗಳಲ್ಲಿ ಯಾತ್ರಿನಿವಾಸ ನಿರ್ಮಾಣ ಮಾಡಲಾಗಿದೆ. |
| | | ಕುಣಿಗಲ್ ತಾಲ್ಲೂಕಿನಲ್ಲಿರುವ ಹುತ್ರಿದುರ್ಗ ಬೆಟ್ಟದಲ್ಲಿ ರೂ.100.00 ಲಕ್ಷಗಳಲ್ಲಿ ಮೆಟ್ಟಿಲು ಮತ್ತು ರೈಲಿಂಗ್ಸ್ ನಿರ್ಮಾಣ ಮಾಡಲಾಗಿದೆ. |
| | | ಕೆ.ಟಿ.ವಿ.ಜಿ. ಶಿಫಾರಸ್ಸುಗಳಡಿ ಕುಣಿಗಲ್ ತಾಲ್ಲೂಕಿನ ಹುತ್ರಿದುರ್ಗ ಹೋಬಳಿಯ ಹುತ್ರಿದುರ್ಗ ಗಿರಿಧಾಮವನ್ನು ಪ್ರಾವಾಸಿ ತಾಣವಾಗಿ ಅಭಿವೃದ್ಧಿಪಡಿಸಲು ರೂ.973.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಈ ಕೆಳಕಂಡ ಕಾಮಗಾರಿಗಳನ್ನು ಅಭಿವೃದ್ಧಿಪಡಿಸಲಾಗುತ್ತಿದ್ದು, ಸದರಿ ಕಾಮಗಾರಿಗೆ ಇದುವರೆಗೆ ರೂ.729.50 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. |

| ಕ್ರ. ಸಂ. | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಕುಣಿಗಲ್ ತಾಲ್ಲೂಕು, ಸಂತೇಪೇಟೆಯಿಂದ ಹುತ್ರಿ ಹಳ್ಳಿಯವರೆಗೂ ರಸ್ತೆ ಅಭಿವೃದ್ಧಿ ಮತ್ತು ಉನ್ನತೀಕರಣ ಕಾಮಗಾರಿ | 200.00 |
| 2 | ಕುಣಿಗಲ್ ತಾಲ್ಲೂಕು, ಹುತ್ರಿದುರ್ಗ ಬೆಟ್ಟದಲ್ಲಿ 2 ಕೊಳವೆ ಬಾವಿ ಕೊರೆಯುವುದು ಹಾಗೂ ನೀರಿನ ಪೈಪನ್ನು ಅಳವಡಿಸುವುದು | 38.00 |
| 3 | ಕುಣಿಗಲ್ ತಾಲ್ಲೂಕು, ಹುತ್ರಿದುರ್ಗ ಹೋಬಳಿ ಕೆರೆ ಆಂಜನೇಯಸ್ವಾಮಿ ದೇವಸ್ಥಾನದಿಂದ ಹುತ್ರಿದುರ್ಗ ಬೆಟ್ಟಕ್ಕೆ ಸಂಪರ್ಕಿಸುವ ರಸ್ತೆಯ ಅಗಲೀಕರಣ, ಚರಂಡಿ ಮತ್ತು ಡಾಂಬರು ಕೆಲಸದ ಕಾಮಗಾರಿ | 415.00 |
| 4 | ಕುಣಿಗಲ್ ತಾಲ್ಲೂಕು ವಡಾಘಟ್ಟ ರಸ್ತೆಯಿಂದ ಹುತ್ರಿಬೆಟ್ಟಕ್ಕೆ 2.00 ಕಿ.ಮೀ. ರಸ್ತೆಯ ನಿರ್ಮಾಣ ಕಾಮಗಾರಿ | 250.00 |
| 5 | ಪ್ರವಾಸಿಗರ ಅನುಕೂಲಕ್ಕಾಗಿ ಬಸ್ಸು ತಂಗುದಾಣದ ನಿರ್ಮಾಣ | 45.00 |
| 6 | ಬೆಟ್ಟದ ಬುಡದಲ್ಲಿ ವಾಹನ ನಿಲುಗಡೆ ಜಾಗದ ಕಾಮಗಾರಿ | 25.00 |
| | **ಒಟ್ಟು** | **973.00** |

| | | |
|---|---|---|
| | ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದ ಅನುದಾನದಡಿಯಲ್ಲಿ ಈ ಕೆಳಕಂಡ 03 ಕಾಮಗಾರಿಗಳನ್ನು ಪುರಾತತ್ವ, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. | |
| 5 | ಹುಲಿಯೂರು ದುರ್ಗ | 1) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಹುಲಿಯೂರು ದುರ್ಗದಲ್ಲಿರುವ ಏಳು ಸುತ್ತಿನ ಕೋಟೆಯ ಸಂರಕ್ಷಣಾ ಕಾಮಗಾರಿಯನ್ನು ರೂ.110.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲಾಗಿದೆ. |
| | | 2) ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಹುಲಿಯೂರು ದುರ್ಗದಲ್ಲಿರುವ ಶ್ರೀ ಚೆಲುವನಾರಾಯಣಸ್ವಾಮಿ, ಮಹಾಲಕ್ಷ್ಮಿ ದೇವಾಲಯಗಳು ಮತ್ತು ಕೋಟೆಯ ಸಂರಕ್ಷಣಾ ಕಾಮಗಾರಿಗೆ ರೂ.82.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳುತ್ತಿದ್ದು, ಪ್ರಸಕ್ತ ಆರ್ಥಿಕ ಸಾಲಿನಲ್ಲಿ ಕಾಮಗಾರಿಯು ಪೂರ್ಣಗೊಳ್ಳಲಿದೆ. ಈ ಕಾಮಗಾರಿಗೆ ಬಿಡುಗಡೆಗೊಂಡಿರುವ ರೂ.61.46 ಲಕ್ಷಗಳ ಅನುದಾನವನ್ನು ವೆಚ್ಚ ಮಾಡಲಾಗಿದೆ. |
| 6 | ಮಾಗಡಿ | 3) ರಾಮನಗರ ಜಿಲ್ಲೆ, ಮಾಗಡಿ ತಾಲ್ಲೂಕು, ಮಾಗಡಿಯಲ್ಲಿರುವ ಪುಷ್ಕರಣಿಯ ಸಂರಕ್ಷಣಾ ಕಾಮಗಾರಿಯನ್ನು ರೂ.172.00 ಲಕ್ಷಗಳ ಅಂದಾಜುವೆಚ್ಚದಲ್ಲಿ ಕೈಗೊಳ್ಳುತ್ತಿದ್ದು, ಕಾಮಗಾರಿಯು ಪೂರ್ಣಗೊಂಡಿದೆ. |